# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 340 |
| ಸದಸ್ಯರ ಹೆಸರು | ಶ್ರೀ. ಎಂ.ಎ ಗೋಪಾಲಸ್ವಾಮಿ<br>(ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | 03.02.2021 |
| ಉತ್ತರಿಸುವ ಸಚಿವರು | ಕೃಷಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಭೂ ಚೇತನ ಕಾರ್ಯಕ್ರಮ ಜಾರಿ ಬಂದ ನಂತರ ಇಳುವರಿ ಪ್ರಮಾಣ ಎಷ್ಟಾಗಿದೆ; ಈ ಹಿಂದಿನ ಇಳುವರಿ ಪ್ರಮಾಣಕ್ಕೆ ಹೋಲಿಸಿದ್ದಲ್ಲಿ, ಭೂಚೇತನ ಕಾರ್ಯಕ್ರಮದಿಂದ ರೈತರಿಗೆ ಅನುಕೂಲವಾಗಿದೆಯೇ; ಪ್ರಸ್ತುತ ಸದರಿ ಕಾರ್ಯಕ್ರಮ ಮುಂದುವರೆಸಲಾಗಿದೆಯೇ; ಅಥವಾ ವಿನೂತನ ಕಾರ್ಯಕ್ರಮದಲ್ಲಿ ವಿಲೀನಗೊಳಿಸಲಾಗಿದೆಯೇ; (ಮಾಹಿತಿ ನೀಡುವುದು) | ರಾಜ್ಯ ಸರ್ಕಾರವು ಖುಷ್ಕಿ ಪ್ರದೇಶದ ವಿವಿಧ ಬೆಳೆಗಳ ಇಳುವರಿ ಹೆಚ್ಚಿಸುವುದರೊಂದಿಗೆ ರೈತರ ಆರ್ಥಿಕ ಮಟ್ಟ ಹಾಗೂ ಜೀವನವನ್ನು ಉತ್ತಮಗೊಳಿಸಲು ಭೂಚೇತನ ಯೋಜನೆಯನ್ನು 2009-10 ರಿಂದ 2012-13 ನೇ ಸಾಲಿನವರೆಗೆ ಅನುಷ್ಠಾನ ಮಾಡಲಾಗಿದೆ. ಈ ಯೋಜನೆಯ ಅನುಷ್ಠಾನ ಪ್ರದೇಶದಲ್ಲಿ ವಿವಿಧ ಬೆಳೆಗಳ ಇಳುವರಿಯು ಸರಾಸರಿ ಶೇಕಡ 15 ರಿಂದ 24 ರಷ್ಟು ಹೆಚ್ಚಳವಾಗಿರುತ್ತದೆ. ಈ ಯೋಜನೆಯ ಫಲಿತಾಂಶದಿಂದ ಪ್ರೇರಿತವಾಗಿ ಈ ಯೋಜನೆಯನ್ನು ಎರಡನೇ ಹಂತವಾಗಿ 2013-14 ರಿಂದ 2017-18 ರವರೆಗೆ ಮುಂದುವರೆಸಲಾಗಿರುತ್ತದೆ.<br>ಪ್ರಸ್ತುತ ಸದರಿ ಕಾರ್ಯಕ್ರಮವನ್ನು ಮುಂದುವರೆಸಿರುವುದಿಲ್ಲ. ಸದರಿ ಕಾರ್ಯಕ್ರಮದ ಅಂಶಗಳಾದ ಮಣ್ಣು ಫಲವತ್ತತೆ ಆಧಾರದಲ್ಲಿ ಪೋಷಕಾಂಶಗಳ ಶಿಫಾರಸ್ಸು ಕಾರ್ಯಕ್ರಮವನ್ನು ಮಣ್ಣಿನ ಫಲವತ್ತತೆ ಹೆಚ್ಚಿಸುವ ಕಾರ್ಯಕ್ರಮದಡಿ ವಿಲೀನಗೊಳಿಸಿ ಅನುಷ್ಠಾನ ಮಾಡಲಾಗುತ್ತಿದೆ. |
| ಆ | ರೈತ ಸಿರಿ ಯೋಜನೆಯಡಿ ಬೆಳೆಗಾರರನ್ನು ಉತ್ತೇಜಿಸಲು ಇಲ್ಲಿಯವರೆಗೆ ಹಾಸನ ಜಿಲ್ಲೆಗೆ ಬಿಡುಗಡೆಯಾದ ಅನುದಾನವೆಷ್ಟು; ಸದರಿ ಯೋಜನೆಯಡಿ ಎಷ್ಟು ಫಲಾನುಭವಿಗಳಿಗೆ ಅನುದಾನ ನೀಡಲಾಗಿದೆ? (ತಾಲ್ಲೂಕುವಾರು ಮಾಹಿತಿ ನೀಡುವುದು) | ರೈತ ಸಿರಿ ಯೋಜನೆಯಡಿ ಬೆಳೆಗಾರರನ್ನು ಉತ್ತೇಜಿಸಲು ಇಲ್ಲಿಯವರೆಗೆ ಹಾಸನ ಜಿಲ್ಲೆಗೆ ರಾಜ್ಯವಲಯದಡಿ ರೂ.39.45 ಲಕ್ಷಗಳು ಹಾಗು ಆರ್.ಕೆ.ವಿ.ವೈ ಅಡಿ ರೂ.40.72 ಲಕ್ಷಗಳು ಅನುದಾನ ಬಿಡುಗಡೆಯಾಗಿರುತ್ತದೆ. ಸದರಿ ಯೋಜನೆಯಡಿ ಒಟ್ಟು 1,923 ಫಲಾನುಭವಿಗಳಿಗೆ ರಾಜ್ಯವಲಯದಡಿ ರೂ.24.66 ಲಕ್ಷಗಳು ಹಾಗು ಆರ್.ಕೆ.ವಿ.ವೈ ಅಡಿ ರೂ.40.32 ಲಕ್ಷಗಳು ಅನುದಾನ ಪಾವತಿಸಲಾಗಿದೆ. ತಾಲ್ಲೂಕುವಾರು ವಿವರ **ಅನುಬಂಧ** ದಲ್ಲಿ ಲಗತ್ತಿಸಲಾಗಿದೆ. |

**ಸಂಖ್ಯೆ: AGRI-ACT/19/ 2021**

(ಬಿ.ಸಿ. ಪಾಟೀಲ್)
ಕೃಷಿ ಸಚಿವರು

## ಅನುಬಂಧ

## ರೈತಸಿರಿ ಯೋಜನೆಯಡಿ ಬಿಡುಗಡೆಯಾದ ಅನುದಾನದ ವಿವರ

| ಜಿಲ್ಲೆ | ತಾಲ್ಲೂಕು | ರಾಜ್ಯ ವಲಯ | | | | |
|---|---|---|---|---|---|---|
| | | ಫಲಾನುಭವಿಗಳ ಸಂಖ್ಯೆ | ಅನುದಾನ ಬಿಡುಗಡೆ (ರೂ ಲಕ್ಷಗಳಲ್ಲಿ | ವೆಚ್ಚ (ರೂ ಲಕ್ಷಗಳಲ್ಲಿ | ಅನುದಾನ ಬಿಡುಗಡೆ (ರೂ ಲಕ್ಷಗಳಲ್ಲಿ | ವೆಚ್ಚ (ರೂ ಲಕ್ಷಗಳಲ್ಲಿ |
| ಹಾಸನ | ಆಲೂರು | 0 | 0.00 | 0.00 | 0.00 | 0.00 |
| | ಅರಕಲಗೂಡು | 16 | 0.36 | 0.16 | 0.36 | 0.36 |
| | ಅರಸೀಕೆರೆ | 1738 | 33.71 | 22.10 | 36.63 | 36.55 |
| | ಬೇಲೂರು | 68 | 2.82 | 0.98 | 1.80 | 1.77 |
| | ಚನ್ನರಾಯಪಟ್ಟಣ | 59 | 1.94 | 0.89 | 1.13 | 0.84 |
| | ಹಾಸನ | 0 | 0.00 | 0.00 | 0.00 | 0.00 |
| | ಹೊಳೆನರಸೀಪುರ | 42 | 0.62 | 0.53 | 0.80 | 0.80 |
| | ಸಕಲೇಶಪುರ | 0 | 0.00 | 0.00 | 0.00 | 0.00 |
| ಜಿಲ್ಲೆ ಒಟ್ಟು | | **1923** | **39.45** | **24.66** | **40.72** | **40.32** |